# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 326 (288) |
| ಸದಸ್ಯರ ಹೆಸರು | ಶ್ರೀ ಎಸ್ ನಾಗರಾಜ್ (ಸಂದೇಶ್ ನಾಗರಾಜ್) |
| ಉತ್ತರಿಸುವ ದಿನಾಂಕ | 03-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಬಿಳಿಗಿರಿ ರಂಗನ ಬೆಟ್ಟದ ದೇವಾಲಯಗಳ ಜೀರ್ಣೋದ್ಧಾರದ ಕಾರ್ಯ ಯಾವಾಗ ಆರಂಭವಾಯಿತು; ಇದಕ್ಕೆ ಮಂಜೂರಾಗಿ ಬಿಡುಗಡೆಯಾಗಿರುವ ಅನುದಾನ ಎಷ್ಟು; ಯಾವ ಯಾವ ಕಾಮಗಾರಿಗಳು ಪೂರ್ಣಗೊಂಡಿವೆ; ಬಾಕಿ ಉಳಿದಿರುವ ಕಾಮಗಾರಿಗಳು ಯಾವುವು; | ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕು, ಬಿಳಿಗಿರಿ ರಂಗನಬೆಟ್ಟದ ಶ್ರೀ ಬಿಳಿಗಿರಿರಂಗನಾಥ ಸ್ವಾಮಿ ದೇವಾಲಯದ ಪುನರ್ ಜೀರ್ಣೋದ್ಧಾರ ಕಾಮಗಾರಿಯು 2017ರ ಏಪ್ರಿಲ್ ನಲ್ಲಿ ರಾಜ್ಯ ಪ್ರಾಚ್ಯವಸ್ತು ಇಲಾಖಾ ವತಿಯಿಂದ ರೂ 240.00ಲಕ್ಷಗಳ ಅನುದಾನದಲ್ಲಿ ಕಾಮಗಾರಿಯು ಆರಂಭವಾಗಿದ್ದು, ದೇವಾಲಯದ ಕೆಲಸವು ಪೂರ್ಣವಾಗಿರುತ್ತದೆ.<br>ರಾಜ್ಯ ಪ್ರವಾಸೋಧ್ಯಮ ಇಲಾಖಾ ವತಿಯಿಂದ ನೆಲಹಾಸು ಕಾಮಗಾರಿ ರೂ 1.00ಕೋಟಿ ಅನುದಾನ ಮಂಜೂರಾಗಿದ್ದು, ಕಾಮಗಾರಿಯನ್ನು ಪ್ರಾರಂಭಿಸಬೇಕಾಗಿರುತ್ತದೆ ಹಾಗೂ ರೂ 4.00ಕೋಟಿಗಳ ಅನುದಾನವು ಮಂಜೂರಾಗಿದ್ದು, ದೇವಾಲಯದ ರಾಜಗೋಪುರ ಮಹಾದ್ವಾರಕ್ಕೆ ಮೆಟ್ಟಿಲುಗಳ ನಿರ್ಮಾಣ ಕಾಮಗಾರಿಗಾಗಿ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಚಾಮರಾಜನಗರ ಇವರಿಂದ ಅಂದಾಜು ಪಟ್ಟಿ ಸಲ್ಲಿಸಲು ಬಾಕಿ ಇರುತ್ತದೆ. |
| ಆ) | ಇದುವರೆಗೆ ಖರ್ಚಾಗಿರುವ ಅನುದಾನ ಎಷ್ಟು ಇನ್ನೂ ಎಷ್ಟು; ಅನುದಾನದ ಅವಶ್ಯಕತೆ ಇದೆ; ನಾಲ್ಕು ವರ್ಷಗಳಾದರೂ ಕಾಮಗಾರಿ ಪೂರ್ಣಗೊಳ್ಳದೇ ಇರಲು ಕಾರಣಗಳೇನು; ಈ ವರ್ಷ ಕಾಮಗಾರಿಗಳನ್ನು ಪೂರೈಸಿ ಜಾತ್ರೆ ಉತ್ಸವಗಳಿಗೆ ಅವಕಾಶ ಮಾಡಿಕೊಡಲಾಗುವುದೇ? | ರಾಜ್ಯ ಪ್ರಾಚ್ಯವಸ್ತು ಇಲಾಖೆಯಿಂದ ಮಂಜೂರಾದ ರೂ.240.00ಲಕ್ಷಗಳ ಅನುದಾನದಲ್ಲಿ ಕಾಮಗಾರಿಯು ಪೂರ್ಣವಾಗಿರುತ್ತದೆ. ಉಳಿದಂತೆ ದಾನಿಗಳಿಂದ ಬಾಗಿಲುಗಳ ನಿರ್ಮಾಣ ವಿದ್ಯುತ್ ವ್ಯವಸ್ಥೆ ಕೆಲಸಗಳು ಆರಂಭವಾಗಿದ್ದು, ಕೆಲಸಗಳು ಪ್ರಗತಿಯಲ್ಲಿರುತ್ತದೆ.<br>2021ರ ಮಾರ್ಚ್-ಏಪ್ರಿಲ್ ಮಾಹೆಯಲ್ಲಿ ದೇವಾಲಯದ ಮಹಾ ಸಂಪ್ರೋಕ್ಷಣೆ ಕಾರ್ಯವನ್ನು ನೆರವೇರಿಸಿ ಭಕ್ತರಿಗೆ ಸೇವಾ ಅವಕಾಶವನ್ನು ಕಲ್ಪಿಸುವ ನಿಟ್ಟಿನಲ್ಲಿ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಕಂಇ 25 ಮುಸಪ್ರ 2021

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.